

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 573 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅಡಗೂರ್ ಹೆಚ್. ವಿಶ್ವನಾಥ್<br>(ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ಸಚಿವರು | ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | 21-02-2022 |

| | ಪ್ರಶ್ನೆ | ಉತ್ತರ |
|---|---|---|
| (ಅ) | ನೂತನ ರಾಷ್ಟ್ರೀಯ ಶಿಕ್ಷಣ ನೀತಿಯಡಿ ಕರ್ನಾಟಕಕ್ಕೆ ಈವರೆಗೂ ಕೇಂದ್ರ ಸರ್ಕಾರದಿಂದ ಬಂದಿರುವ ಹಣವೆಷ್ಟು; | ರಾಷ್ಟ್ರೀಯ ಶಿಕ್ಷಣ ನೀತಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರದಿಂದ ಯಾವುದೇ ಅನುದಾನವನ್ನು ಒದಗಿಸಿರುವುದಿಲ್ಲ. |
| (ಆ) | ಈ ಯೋಜನೆ ಅಡಿಯಲ್ಲಿ ಒಂದನೇ ತರಗತಿಯಿಂದ 12ನೇ ತರಗತಿಯವರೆಗೂ ಕೈಗೊಂಡಿರುವ ಯೋಜನೆಗಳೇನು; ಅನುಷ್ಠಾನವೇನು; | ರಾಷ್ಟ್ರೀಯ ಶಿಕ್ಷಣ ನೀತಿ 2020ರ ಅನುಷ್ಠಾನ ಯೋಜನೆಗಾಗಿ ಕೈಗೊಂಡಿರುವ ಕ್ರಮಗಳು ಈ ಕೆಳಕಂಡಂತಿವೆ;-<br>1. ಶಾಲಾ ಶಿಕ್ಷಣದ ಮರು ಸಂರಚನೆ<br>2. ಶಾಲಾ ಶಿಕ್ಷಣದಲ್ಲಿ ಪೂರ್ವ ಬಾಲ್ಯಾವಸ್ಥೆ ಶಿಕ್ಷಣ ಹಂತದ ಸೇರ್ಪಡೆ.<br>3. ಆರಂಭಿಕ ಸಾಕ್ಷರತೆ ಹಾಗೂ ಸಂಖ್ಯಾಜ್ಞಾನದ ಸಾಧನೆ.<br>4. ಸಮತೆಯುಳ್ಳ ಹಾಗೂ ಸಮನ್ವಯ ಶಿಕ್ಷಣ.<br>5. ಶಾಲಾ ಸಂಕೀರ್ಣಗಳು (School Complex), ಪರಿಣಾಮಕಾರಿ ಆಡಳಿತ ಹಾಗೂ ಗರಿಷ್ಠ ಸಂಪನ್ಮೂಲಗಳಿಗಾಗಿ ಕ್ಲಸ್ಟರ್‌ಗಳು.<br>6. ಪಠ್ಯಕ್ರಮ, ಬೋಧನಾ ವಿಧಾನ ಹಾಗೂ ಮೌಲ್ಯಮಾಪನಾ ಸುಧಾರಣೆಗಳು.<br>7. ಶಿಕ್ಷಕರ ನೇಮಕಾತಿ, ಸೇವಾ ನಿಯಮಗಳು ಹಾಗೂ ವೃತ್ತಿ ಬೆಳವಣಿಗೆ |
| (ಇ) | ನೂತನ ಶಿಕ್ಷಣ ನೀತಿಯ ಪ್ರಚಾರ ಮತ್ತು ತಿಳಿವಳಿಕೆ ಹಾಗೂ ಆಗಿರುವ ಪ್ರಗತಿ ಏನು? | 1. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಂತದಲ್ಲಿ ಸೆಪ್ಟೆಂಬರ್ 1ರಿಂದ 25ರವರೆಗೆ ಶಿಕ್ಷಣ ಕ್ಷೇತ್ರದ ಎಲ್ಲಾ ಭಾಗಿದಾರರೊಡನೆ ವೆಬಿನಾರ್ ಮೂಲಕ ಸಮಾಲೋಚನಾ ಸಭೆಗಳನ್ನು ಆಯೋಜಿಸಲಾಗಿದೆ. ಸದರಿ ಸಭೆಗಳಲ್ಲಿ ಸಂಗ್ರಹಿಸಿದ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಅನುಷ್ಠಾನ ಚೌಕಟ್ಟಿನ ರೂಪುರೇಷೆಗಳನ್ನು ವಿನ್ಯಾಸಗೊಳಿಸುವ ಸಂದರ್ಭದಲ್ಲಿ ಅಳವಡಿಸಿಕೊಳ್ಳಲಾಗುವುದು.<br>2. ರಾಷ್ಟ್ರೀಯ ಶಿಕ್ಷಣ ನೀತಿ 2020ರ ಸಂಬಂಧ ಶಿಕ್ಷಣ ಮಂತ್ರಾಲಯ, ಭಾರತ ಸರ್ಕಾರ ಇವರು ನೀಡಿರುವ Task Points ಗಳನ್ನು 2020 ರಿಂದ 2030ರವರೆಗಿನ ಕಾಲಸೂಚಿಯಲ್ಲಿ ಅನುಷ್ಠಾನ ಮಾಡಲು ರಾಜ್ಯ ಸರ್ಕಾರ ಹಾಗೂ ಇಲಾಖೆಯು ಕ್ರಮ ಕೈಗೊಂಡಿದೆ. ಇದರಂತೆ ಶ್ರೀ ಮದನ್ ಗೋಪಾಲ್‌ರವರ ಅಧ್ಯಕ್ಷತೆಯಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಯ 2020ರ |

ಅನುಷ್ಠಾನ ಕಾರ್ಯಪಡೆ ರಚಿಸಿ ಎನ್.ಇ.ಪಿ. 2020ರ ನೀತಿಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಿ ಮೇಲುಸ್ತುವಾರಿ ಮಾಡುವುದು ಈ ಸಮಿತಿಯ ಮುಖ್ಯ ಕಾರ್ಯವಾಗಿದೆ. (ಸರ್ಕಾರದ ಆದೇಶ ಸಂ. ಇಪಿ 275 ಪಿಜಿಸಿ 2021, ದಿನಾಂಕ: 16-09-2021).

3. ಎನ್.ಇ.ಪಿ 2020ರ ಅನುಷ್ಠಾನ ಕಾರ್ಯಪಡೆ ಸಂಬಂಧ 9 ಸಭೆಗಳನ್ನು ಆಯೋಜಿಸಲಾಗಿದೆ.
4. ಅನುಷ್ಠಾನ ಕಾರ್ಯಪಡೆ ಸಮಿತಿಯ ಅಡಿಯಲ್ಲಿ 4 ಉಪಸಮಿತಿಗಳನ್ನು ರಚಿಸಿದ್ದು, ರಾಜ್ಯದಲ್ಲಿ ಜಾರಿಗೊಳಿಸಲು ಎನ್.ಇ.ಪಿ. 2020ರ ಶಿಫಾರಸ್ಸುಗಳಿಗನುಗುಣವಾಗುವಂತೆ ವಿವಿಧ ಕ್ಷೇತ್ರಗಳಲ್ಲಿ ರೂಪುರೇಷೆಗಳನ್ನು ರಚಿಸಿ ಸರ್ಕಾರದ ಹಂತದಲ್ಲಿ ಅನುಮೋದನೆ ಪಡೆಯಲು ಕಾರ್ಯಪ್ರವೃತ್ತರಾಗಿರುತ್ತಾರೆ.
5. ಕ್ಷೇತ್ರ ಹಂತದಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಅಧಿಕಾರಿಗಳಿಗೆ ಎನ್.ಇ.ಪಿ. 2020ರ ಸಮರ್ಪಕ ಅನುಷ್ಠಾನಗೊಳಿಸುವ ಕುರಿತು ತರಬೇತಿ ನೀಡಲಾಗಿದೆ.
6. ರಾಷ್ಟ್ರೀಯ ಶಿಕ್ಷಣ ನೀತಿಯನ್ನು ವ್ಯಾಪಕವಾಗಿ ಪ್ರಚಾರ ಮತ್ತು ತಿಳುವಳಿಕೆ ನೀಡಲು ಎನ್ಇಪಿ 2020ರ ಕನ್ನಡ ಅವತರಣಿಕೆಯ ಪುಸ್ತಕವನ್ನು ಪ್ರತೀ ಶಾಲೆಗೆ ಒಂದು ಪ್ರತಿಯಂತೆ ನೀಡುವ ಕಾರ್ಯಪ್ರಗತಿಯಲ್ಲಿದೆ ಹಾಗೂ ವಿಡಿಯೋ ಪೋಸ್ಟರ್ಸ್, ಭಿತ್ತಪತ್ರಗಳನ್ನು ಸಿದ್ಧಪಡಿಸಲಾಗುತ್ತಿದೆ.

ಮುಂದುವರೆದು, ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದಂತೆ ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿಗಳು ಹಾಗೂ ಈ ಹಿಂದೆ ಉನ್ನತ ಶಿಕ್ಷಣ ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀ ಎಸ್.ವಿ. ರಂಗನಾಥ್, ಭಾ.ಆ.ಸೇ ಇವರ ಅಧ್ಯಕ್ಷತೆಯಲ್ಲಿ ಕಾರ್ಯಪಡೆಯನ್ನು ರಚಿಸಿದ್ದು, ಕಾರ್ಯಪಡೆಯು ಸಲ್ಲಿಸಿದ್ದ ವರದಿಯನ್ನು ಸಚಿವ ಸಂಪುಟದ ಅನುಮೋದನೆಯೊಂದಿಗೆ ಜಾರಿಗೆ ತರಲಾಗಿದೆ.

ಸಮಗ್ರ ಮತ್ತು ಬಹುಶಿಸ್ತೀಯ ಯುಜಿ ಶಿಕ್ಷಣದ ಅನುಷ್ಠಾನಕ್ಕೆ ಸಂಬಂಧಿಸಿದಂತೆ, ಜುಲೈ-2020ರಲ್ಲಿ NEP-2020ಕ್ಕೆ ಅಧಿಸೂಚನೆ ಹೊರಡಿಸಿದಾಗಿನಿಂದಲೂ, ಹಲವಾರು ವೆಬಿನಾರ್‌ಗಳು ಮತ್ತು ಚರ್ಚೆಗಳನ್ನು ವಿಶ್ವವಿದ್ಯಾಲಯಗಳು ಮತ್ತು ಕಾಲೇಜುಗಳಲ್ಲಿ ಆಯೋಜಿಸಲಾಗಿದೆ. ಹಲವಾರು ವಿಶ್ವವಿದ್ಯಾಲಯಗಳು ಅವುಗಳನ್ನು ಕಾರ್ಯಗತಗೊಳಿಸಲು ಕಾರ್ಯಪ್ರವೃತ್ತವಾಗಿದ್ದು, ಟಾಸ್ಕ್ ಫೋರ್ಸ್ ಉಪಸಮಿತಿಯು ವಿಶಾಲ ಚೌಕಟ್ಟನ್ನು ಸೂಚಿಸಿದ್ದು, ಈ ಕುರಿತು ವರ್ಚುವಲ್ ಸಭೆಗಳನ್ನು ನಡೆಸಲಾಗಿದೆ. ಇದಲ್ಲದೆ, ಎಲ್ಲಾ ವಿಶ್ವವಿದ್ಯಾಲಯದ ಕುಲಪತಿಗಳು, ವಿಶ್ವವಿದ್ಯಾಲಯಗಳ/ಕಾಲೇಜುಗಳ ಹಿರಿಯ ಅಧ್ಯಾಪಕರೊಂದಿಗೆ ಸಂವಾದ ನಡೆಸಲಾಗಿದೆ.

ಈ ದಿಸೆಯಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಕಾರ್ಯಗತಗೊಳಿಸಲು ಹಲವಾರು ಸಮಿತಿಗಳನ್ನು (Faculty committes) ರಚಿಸಲಾಗಿದ್ದು, ಮಾದರಿ ಪಠ್ಯಕ್ರಮಗಳನ್ನು ಸಿದ್ಧಪಡಿಸಿವೆ. ಇವುಗಳ ಆಧಾರದ ಮೇಲೆ ಮಾದರಿ ಪಠ್ಯಕ್ರಮಗಳನ್ನು ರೂಪಿಸಲು ವಿಷಯವಾರು ಸುಮಾರು 40 ಸಮಿತಿಗಳನ್ನು ರಚಿಸಲಾಗಿತ್ತು.

ಪಠ್ಯಕ್ರಮ ಸಮಿತಿಯು ರೂಪಿಸಿದ ಮಾದರಿ ಪಠ್ಯಕ್ರಮಗಳನ್ನು ಎಲ್ಲಾ ವಿಶ್ವವಿದ್ಯಾಲಯಗಳಿಗೆ ಸ್ವಾಯತ್ತ ಕಾಲೇಜುಗಳಿಗೆ ಕಳುಹಿಸಿ ಪರಿಸ್ಥಿತಿಗೆ ಅನುಗುಣವಾಗಿ ಪರಿಷ್ಕರಿಸಿ ಅಥವಾ ಸೂಕ್ತ ಮಾರ್ಪಾಡುಗಳೊಡನೆ ಅಳವಡಿಸಿಕೊಂಡು 2020-21ನೇ ಶೈಕ್ಷಣಿಕ ವರ್ಷದಿಂದಲೇ ಅನುಷ್ಠಾನಗೊಳಿಸಲಾಗಿದೆ.

ಇದಲ್ಲದೇ, Karnataka Higher Education Academy, Dharwad ದಿಂದ ರಾಜ್ಯದ ಎಲ್ಲಾ ಬೋಧಕರಿಗೆ ಉಚಿತವಾಗಿ ತರಬೇತಿ ನೀಡಲು ವ್ಯವಸ್ಥೆ ಮಾಡಲಾಗಿದೆ ಮತ್ತು ಹಲವು ವಿಶ್ವವಿದ್ಯಾಲಯಗಳಲ್ಲಿರುವ ಮಾನವ ಸಂಪನ್ಮೂಲ ಅಭಿವೃದ್ಧಿ ಕೇಂದ್ರಗಳ (ಹಿಂದಿನ Academic Staff College)ಗಳ ಮುಖಾಂತರ ತರಬೇತಿ ನೀಡಲು ಕ್ರಮವಹಿಸಲಾಗಿದ್ದು, ವಿಶ್ವವಿದ್ಯಾಲಯದ ಹಂತದಲ್ಲಿ ಸಹಾಯವಾಣಿಗಳನ್ನು ತೆರೆಯಲಾಗಿದೆ.

ಪ್ರತಿಯೊಬ್ಬ ವ್ಯಕ್ತಿಯ ಸೃಜನಶೀಲ ಅಂತಸತ್ವವನ್ನು ಅಭಿವೃದ್ಧಿಗೊಳಿಸಲು ಶಿಕ್ಷಣದ ಎಲ್ಲಾ ಆಯಾಮಗಳನ್ನು ಪಠ್ಯಕ್ರಮ ಬೋಧನಾ ಪದ್ಧತಿ ಮತ್ತು ಪರೀಕ್ಷೆಗಳನ್ನು ಪರಿಷ್ಕರಿಸಿ ನವೀಕರಿಸಲಾಗುತ್ತಿದೆ.

ನೂತನ ಶಿಕ್ಷಣ ನೀತಿಯ ಬಗ್ಗೆ ಸಂವೇದನೆ ಮೂಡಿಸಲು ವಿದ್ಯಾರ್ಥಿಗಳು, ಅಧ್ಯಾಪಕರು, ಪೋಷಕರು ಮತ್ತು ಶಿಕ್ಷಣ ತಜ್ಞರೊಂದಿಗೆ ವಿಸ್ತೃತ ಜಾಗೃತಿ ಅಭಿಯಾನವನ್ನು ಕೈಗೊಳ್ಳಲಾಗಿದೆ.

ರಾಷ್ಟ್ರೀಯ ಶಿಕ್ಷಣ ನೀತಿಯ ಕುರಿತು ದಿನಪತ್ರಿಕೆಗಳಲ್ಲಿ ಪ್ರಕಟಿಸುವ ಮೂಲಕ ಸಾರ್ವಜನಿಕರು, ವಿದ್ಯಾರ್ಥಿಗಳು ಹಾಗೂ ಪೋಷಕರ ಗಮನ ಸೆಳೆಯಲಾಗಿದೆ.

ಸಂಖ್ಯೆ: ಇಡಿ 50 ಯುಎನ್ಇ 2022

(ಡಾ: ಅಶ್ವಥ್ ನಾರಾಯಣ ಸಿ.ಎನ್.)

ಉನ್ನತ ಶಿಕ್ಷಣ, ಐಟಿ & ಬಿಟಿ,

ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,

ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.